ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಮಾದಕ ವಸ್ತುಗಳಿಗೆ ಸಂಬಂಧಿಸಿದ ಪ್ರಕರಣಗಳ ಬಗ್ಗೆ

ಶ್ರೀ ಎಸ್. ರವಿ(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) –

547 (516) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಕಳೆದ 5 ವರ್ಷಗಳಲ್ಲಿ ಕರ್ನಾಟಕ ರಾಜ್ಯದಲ್ಲಿ ಮಾದಕ ವಸ್ತುಗಳಿಗೆ ಸಂಬಂಧಿಸಿದಂತೆ ಎಷ್ಟು ಕ್ರಿಮಿನಲ್ ಪ್ರಕರಣಗಳು ದಾಖಲಾಗಿವೆ; ಹಾಗೂ ಎಷ್ಟು ಜನರನ್ನು ಈ ಪ್ರಕರಣಗಳಲ್ಲಿ ಬಂಧಿಸಲಾಗಿದೆ;

(ಆ) ಸದರಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಮಾದಕ ವಸ್ತುಗಳ ಮೂಲವನ್ನು ಅಂದರೆ ಅವುಗಳನ್ನು ಬೆಳೆಯುವ/ತಯಾರಿಸುವ ಉತ್ಪಾದಿಸುವ ಸ್ಥಗಳನ್ನು ಪತ್ತೆ ಹಚ್ಚಲಾಗಿದೆಯೇ; (ವಿವರಗಳನ್ನು ನೀಡುವುದು)

(ಇ) ಮಾದಕ ವಸ್ತುಗಳಿಗೆ ಸಂಬಂಧಿಸಿದ ಪ್ರಕರಣಗಳಲ್ಲಿ ಭಾಗಿಯಾದ ಆರೋಪಿತರ ಆಸ್ತಿಯನ್ನು ಸರ್ಕಾರ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಏನಾದರೂ ಕ್ರಮ ಕೈಗೊಂಡಿದೆಯೇ; (ವಿವರ ನೀಡುವುದು)

(ಈ) ಕಳೆದ 5 ವರ್ಷಗಳಲ್ಲಿ NDPS Act ಅಡಿಯಲ್ಲಿ ಎಷ್ಟು ಪ್ರಕರಣಗಳನ್ನು ದಾಖಲಿಸಲಾಗಿದೆ; (ಠಾಣಾವಾರು ಪ್ರಕರಣಗಳ ಮಾಹಿತಿಯನ್ನು ನೀಡುವುದು)

(ಉ) ಇದುವರೆವಿಗೂ ಎಷ್ಟು ಕೆಜಿ ಮಾದಕ ವಸ್ತುಗಳನ್ನು ವಶಪಡಿಸಿಕೊಳ್ಳಲಾಗಿದೆ; ಕಳೆದ 5 ವರ್ಷಗಳಲ್ಲಿ ವರದಿಯಾದ ಪ್ರಕರಣಗಳಲ್ಲಿ ಎಷ್ಟು ಜನ ಆರೋಪಿಗಳಿಗೆ ಶಿಕ್ಷೆಯಾಗಿದೆ?

(ಊ) ಡ್ರಗ್ಸ್ ಬಳಕೆಯನ್ನು ತಡೆಗಟ್ಟಲು ಸರ್ಕಾರ ಕೈಗೊಂಡಿರುವ ಕ್ರಮಗಳಾವುವು;

(ಋ) ಉನ್ನತ ಮಟ್ಟದ ತನಿಖೆಗೆ ಆದೇಶಿಸಲಾಗಿದೆ; ಈ ಬಗ್ಗೆ ಉನ್ನತ ಮಟ್ಟದ ಸಭೆ ನಡೆಸಲಾಗಿದೆಯೇ; ಸಭೆ ನಡೆಸಿದಲ್ಲಿ ಯಾವ ಯಾವ ದಿನಾಂಕಗಳಂದು ನಡೆಸಲಾಗಿದೆ; (ವಿವರ ನೀಡುವುದು)

(ಎ) ರಾಜ್ಯದಲ್ಲಿನ ಡ್ರಗ್ಸ್ ನಿಯಂತ್ರಕ್ಕೆ ಎಷ್ಟು ಚೆಕ್ ಪೋಸ್ಟ್‌ಗಳನ್ನು ತೆರೆಯಲಾಗಿದೆ; ಯಾವ ಯಾವ ಮುಂಜಾಗ್ರ ತಾ ಕ್ರಮಗಳನ್ನು ಕೈಗೊಳ್ಳಲಾಗಿದೆ?